ಶ್ರೀರಂಗ—ಸಾರಸ್ವತ

೪

# ಆಹ್ವಾನ

(ಕವನಸಂಗ್ರಹ)

ಶ್ರೀರಂಗ

ರಂಗಮಂಗ ಪ್ರಕಾಶನ
— ಧಾರವಾಡ —

# ಪರಿವಿಡಿ

# ಬಾಳು ನಗೆಗೀಡು!

ಯಾರದೀ ಕನ್ನಡದ ನಾಡು?—ಎಂದೆನುವೆ,
ಯಾರದೆಂದರಿದೊಲಿದು ಹೇಳೆನ್ನ ಮನವೆ!

೧

ಅದ್ವೈತಬುದ್ಧಿಗಿದು ತೌರುತಾಣಂತೆ,
ಗುದ್ದಾಟ ಕಣವಿಲ್ಲಿ ಜಾತಿಗಳ ಸಂತೆ;
ವೈರಾಗ್ಯವೀರನೆನಿಸಿದನು ಶಂಕರನು,
ಪರತಂತ್ರಸುಖಿ ನಾವು ಉದರಕಿಂಕರರು!

೨

'ಆಚಾರವೇ ಸ್ವರ್ಗ' ಎಂಬ ಮಾತಂದು,
'ಸ್ವರ್ಗ ಸ್ವೈರಾಚಾರ' ಎಂಬ ಮಾತಿಂದು;
ಕೂಡಲದ ಸಂಗಮವ ಮರೆ-ತೊರೆದು ನಿಂದು,
ಕೂಡದೆಯೆ ಸಂಗಮವು ಬೇಕೆಂಬರಿಂದು!

೩

ಹುಕ್ಕನೆಂಬವನೊಬ್ಬ ಮಾಧವನದೊಬ್ಬ
ಚೊಕ್ಕಾದ ಕಲಿತನವ ಬೆಳಗಿಸಿದರಂತೆ;
ಬೆಕ್ಕಿನಂದದಿ ಕಣ್ಣುಮುಚ್ಚಿಕೊಂಡೆಮ್ಮ-
ಬಿಕ್ಕುಬಾಳಿಂದು ಬರಿ ಕೂಳಿನಾ ಚಿಂತೆ!

೪

ಪಾರುಗಾಣದ ನಿಧಿಯು ನದಿ-ಬೆಟ್ಟ ನಾಡು
ದೂರದರ್ಶಿಗೆ ಇರಲಿ ಹೋರಾಡುವವಗೆ;
ನಮಗೇಕೆ ಈ ನಾಡು ಸಾಹಸದ ಬೀಡು?
ತಮಗಾಗಿ ದುಡಿಯದಿರೆ ಬಾಳು ನಗೆಗೀಡು!

# ಹೊಸ ವಿಶ್ವ ಬೇಕಾಯ್ತು!

ದೇಗುಲದಿ ಕೇಳುತಿದೆ ಪೂಜಾರಿಯಾ ಗಂಟೆ,
ಬಾಗಿಲದಿ ಕೇಳುತಿದೆ ಪಾದರಕ್ಷೆಯ ತಂಟೆ,
ಇದುವೆ ಲೋಕಾಚಾರ,
ಇದುವೆ ಅನುಭವಸಾರ!

೧

ವಿಶ್ವದೇಗುಲದಲ್ಲಿ ಗುಂಕರಿಸುತಿದೆ ಕೇಳು
ಸರ್ವಾಧಿಕಾರಿತನದಾ ಪ್ರಚಾರ,
ತುದಿಗೇರಿ ಕನ್ನಡದ ನಾಡಿನೊಳು ಗುಣುಗುತಿದೆ
ತನ್ನದಾವುದು ಜಾತಿಯಿಾ ವಿಚಾರ!
ಬ್ರಹ್ಮಾಂಡ ಉರುಳುತಿದೆ, ಜೀವಾಣು ನರಳುತಿದೆ
ಸರ್ವಭಕ್ಷಕಶಕ್ತಿಯಡಿಗಳಲ್ಲಿ;
ಸ್ವಾತಂತ್ರ್ಯ ಜಾರುತಿದೆ ಜಾತಿತನ ನಾರುತಿದೆ
ಭಾರತದ—ಕನ್ನಡದ—ನರಹುಳುಗಳ!
ಬಾಯ ತತ್ತ್ವವ ಸಾರಿ,
ನಡೆವಾಗ ಹೊಲೆಗೇರಿ
ಸುತ್ತಲಿದೆ ಎನೆ ಹಾರಿ,
ಕಾಣನೀ ಅವಿಚಾರಿ
ಜಗವನ್ನು ಸುಡಲೆದ್ದ ಶಕ್ತಿತತ್ತ್ವವನು—
ವ್ಯಕ್ತಿಯನು ಬಿಗಿಯುವಾ ಶಕ್ತಿಮೋಹವನು.
ಇದುವೆ ಲೋಕಾಚಾರ, ಇದುವೆ ಅನುಭವ ಸಾರ!!

೨

ಸಾಹಸದ ಮಾನವನು ಯಂತ್ರಶಕ್ತಿಯ ತಂದ,
ವಿಶ್ವವದು ಒಂದೆಂದ; ನಮ್ಮನಿಲ್ಲಿ—
ಬಂಧಿಸಿತು ಸಂಕೋಲೆ ಒಂದಾಗಿ; ವೈನೋವು
ಸಂಧಿಸಿತು, ಸಾಂನಿಧ್ಯ ಬೇಡವೆನ್ನೆ;
ವಿಶ್ವಮೇಧದಿ ಜೀವರಾಶಿಗಳ ಬೇಯಿಸಿತು
ವಿಶ್ವೈಕ್ಯ ಸಾರುತ್ತ ಯಂತ್ರಶಕ್ತಿ;
ಶೃಂಖಲೆಯ ಬಿಗಿತದಲಿ ವೈಗೆ ವೈ ತಿಕ್ಕುತಲಿ
ಐಕ್ಯ ಬೇಡೆಂದಿತ್ತು ದಾಸ್ಯಯುಕ್ತಿ;
ಯಂತ್ರದಾ ವಿಶ್ವೈಕ್ಯ
ರಾಷ್ಟ್ರಗಳ ಸ್ಪರ್ಧೆಯೆನೆ—
ರಾಷ್ಟ್ರದಾ ದಾಸ್ಯೈಕ್ಯ
ಬಾಂಧವ್ಯವಲ್ಲವೆನೆ—
ಇತಿಹಾಸ ಸುಳ್ಳಾಯ್ತು, ಸಂಸ್ಕೃತಿಯು ಜೊಳ್ಳಾಯ್ತು,
ಪ್ರಗತಿ ಬರಿಮಾತಾಯ್ತು, ಸುಖವು ಸರಿದೇ ಹೋಯ್ತು;
ಹಸನ ಜೀವನಕಾಗಿ
ಹೊಸ ವಿಶ್ವ ಬೇಕಾಯ್ತು!
ದೇಗುಲದಿ ಕೇಳುತಿದೆ ಪೂಜಾರಿಯಾ ಗಂಟೆ,
ಬಾಗಿಲದಿ ಕೇಳುತಿದೆ ಪಾದರಕ್ಷೆಯ ತಂಟೆ!

# ಕ್ರಾಂತಿಯ ಸಂತೆಗೆ ಏಳಿರಿ!

ಏಳಿರಿ ಎನ್ನುತ, ಎಚ್ಚರ ಮಾಡುತ, ಕೆಚ್ಚೆದೆಯೂರುತ—ಸಾಗುವ!
ಕೇಳಿರಿ ಎನ್ನುತ, ಕೇಳಿಸುವಂತೆಯೆ, ಬಿಚ್ಚುಬಾಯಿಯಲಿ—ಕೂಗುವ!!

೧

ಯುಗ ಬದಲಾಗಿದೆ, ಧರ್ಮಾಂತರಿಸಿದೆ ಮಾನವಕುಲವಿದೊ—ಏಳಿರಿ!
ಮಾನವ ಬಲಿತಿಹ, ದಾನವನಾಗಿಹ, ಮಾಯಾಶಕ್ತಿಯ—ಕೇಳಿರಿ!
ದೂರದ ನೋಟಕೆ ಅಂದದ ಬಣ್ಣವು; ಕಣ್ಣಿಗೆ ಮಾಟದ—ಓರಣ,
ಬಸಿರೊಳು ಬಾಯುರಿ, ಬಾಯಲಿ ಜಗವನು ನುಂಗುವ ಕರಾಳ—ಮಾರಣ!
'ಮಂಥನಕಾಲದಿ ಮುಂಚಿನ ದನುಜರು ವಂಚಿತರಾದರೆ'—ಎನ್ನುತ
ನಕ್ಕನಿಂದಿನಾ ಮನುಜ, ಸೊಕ್ಕಿದಾ ಸಿರಿಯನು ಸುಧೆಯನು—ಹೊಂದುತ
ಸಿಕ್ಕದೆ ಸುಧೆಯದು ದೇವನು ಅಮರನು ಎಂಬುದಿಂದು ಬರಿ—ಭ್ರಾಂತಿಯೆ?
ಮರ್ತ್ಯತೆ ದೇವಗೆ, ದನುಜತೆ ಮನುಜಗೆ, ಸಂಕ್ರಾಂತಿಸಿದುದೆ—ಕ್ರಾಂತಿಯೆ?
ಯುಗ ಬದಲಾಗಿದೆ—ಕೇಳಿರಿ!
ದಾನವ-ನಾಶಕೆ——ಏಳಿರಿ!
ದೇವ ದೇವತನ—ಬಿಟ್ಟಿಹ,
ಧರ್ಮಾಂತರವನು—ಕೇಳಿರಿ!
'ನರ ದನುಜಾಂತಕ'—ಎನ್ನಿರಿ;
ಕ್ರಾಂತಿಯ ಸಂತೆಗೆ—ಏಳಿರಿ!
ಏಳಿರಿ! ಏಳಿರಿ!!
ಏಳಿರಿ ಎನ್ನುತ, ಎಚ್ಚರ ಮಾಡುತ, ಕೆಚ್ಚೆದೆಯೂರುತ—ಸಾಗುವ!
ಕೇಳಿರಿ ಎನ್ನುತ, ಕೇಳಿಸುವಂತೆಯೆ, ಬಿಚ್ಚುಬಾಯಿಯಲಿ—ಕೂಗುವ!!

ಯುಗ ಬದಲಾಗಿದೆ, ಬಗೆ ಬದಲಾಗಿದೆ, ಜಗವೇ ಕೆಳಮೇಲ್—ಆಗಿದೆ,
ರೌರವ ತಾಂಡವ ಕೌರವಪಾಂಡವರಾಡಿದ ರೀತಿಯೆ—ಸಾಗಿದೆ;
ಬಗೆ ಬದಲಾಗಿದೆ, ಕುರುಸುತ ನಾಯಕ, ಧರ್ಮಜನು ವಿರೋಧಿ—ಹೀಗಿರೆ,
ಸಿರಿ-ಸುಖ-ಸಂಪದಗಗಳು ಪಾಂಚಾಲಿಯ ತೆರದಲಿ ವರಿಸಿವೆ—ಐವರ.
ಮರಣ-ವೇಗ-ಅನ್ನಾರೋಗ್ಯಗಳೇ ಉಡಿಗೆ-ತೊಡಿಗೆಗಳೆ—ಇಂದಿನ
ಐವರು ದೇವರು ಪಾಂಡವ ಜನಕರು; ಶಕ್ತಿ ಸಮೃದ್ಧಿಯು—ತಂದಿದೆ;
ಉಳಿದ ಶತಾವಧಿ ಜನ ಕೌರವರೆನೆ ಬಂಧಿಸಿ ಅವರನು—ಕೊಂದಿದೆ.
ಯಂತ್ರಜನಿತ ಶಸ್ತ್ರಾನ್ನ-ವಸ್ತ್ರಗಳ ಮಂತ್ರವೆ, ಗಾಂಡಿವ—ಬಂಧನ

ಯುಗ ಬದಲಾಗಿದೆ—ಏಳಿರಿ!
ಮಂತ್ರದ ಗಾಂಡಿವ—ಸೀಳಿರಿ!
ಬಾಂಧವರೊಳಿದೆಯೆ—ಬಂಧನ?
ಧರ್ಮಾಂತರವನೆ—ತಾಳಿರಿ,
ಮನುಜನ ದನುಜತೆ—ಕೀಳಿರಿ,
ಯುಗ ಬದಲಾಗಿಸೆ—ಏಳಿರಿ!
ಏಳಿರಿ! ಏಳಿರಿ!!

ಏಳಿರಿ ಎನ್ನುತ, ಎಚ್ಚರ ಮಾಡುತ, ಕೆಚ್ಚೆದೆಯೂರುತ—ಸಾಗುವ!
ಕೇಳಿರಿ ಎನ್ನುತ, ಕೇಳಿಸುವಂತೆಯೆ, ಬಿಚ್ಚುಬಾಯಿಯಲಿ—ಕೂಗುವ!!

# ಕೇರಿಯ ನಾಯಿ

೧

ನಮ್ಮೂರ ಕೇರಿಯಲಿ ನಾಯಿಯೊಂದಿತ್ತು,
ನಾಯಿಯಾ ಕೊರಳೊಳಗೆ ಗಂಟೆಯೊಂದಿತ್ತು,
ಆ ಗಂಟೆಯೊಳಗೊಂದು ನಾಲಗೆಯದಿತ್ತು,
ನಾಯಿ ನಡೆಯಲು ಗಂಟೆ ಬಾರಿಸುತ್ತಿತ್ತು.

೨

ನಾಯಿ ನಡೆಯಲು ಗಂಟೆ ಬಾರಿಸುತ್ತಿತ್ತು,
ಗಂಟೆ ಸದ್ದದು ದೂರದಲಿ ಕೇಳುತ್ತಿತ್ತು,
ಕೇಳಿ ಸದ್ದನು ಯುದ್ಧ ಮಾಡುವರ ತೆರದಿ,
ಎದ್ದು ಕೇರಿಯ ಬಾಲಕರು ನಡೆದು ಭರದಿ,
ಸಿದ್ಧರಾಗುವರು ಬೀದಿಯ ಬಾಗಿಲಲ್ಲಿ,
ಇದ್ದಷ್ಟು ಕಲ್ಲುಗಳ ಹಿಡಿದು ಕೈಯಲ್ಲಿ.
ದಶರಥನ ಶಬ್ದಭೇದದ ಬಾಣದಂತೆ,
ಎಸೆಯುವರು ಕೇಳಿಸಲು ಗಣಣಣಣ ಗಂಟೆ;
ದಿನದಿನಕೆ ಹೆಚ್ಚಾಗಿ ಗುರಿ ತಪ್ಪದಂತೆ
ಬಾಲಕರ ಕಾಟವಾಗಲು ಸಹಿಸದಂತೆ—
ಕುಣಿದೋಡುವುದು ನಾಯಿ ಹುಚ್ಚುಹಿಡಿದಂತೆ.

೩

ಕುಣಿದೋಡುವುದು ನಾಯಿ ಹುಚ್ಚು ಹಿಡಿದಂತೆ;
ಮಿಕ್ಕ ನಾಯಿಗಳಿಗದು ಮೋಜಿನಾ ಸಂತೆ—

ಎನಿಸೆ ಬೆನ್ನಟ್ಟುವುವು ಒಂದೊಂದರಂತೆ,
ಹಿಂದುಹಿಂದಾಗುತಲಿ ಸುತ್ತುಸುತ್ತಾಗಿ
ಬೊಗಳುತ್ತ ಗುರ್ರೆನುತ ಕನಲಿ ತಲೆವಾಗಿ
ಬಾಲವನು ಚಲಿಸುತ್ತ ಕಾಲ ಕೆದರುತ್ತ.
ಆಗ ಗಂಟೆಯ ನಾಯಿ ಓಡಲತ್ತಿತ್ತ—
ಓಡೋಡಿದಂತೆ ಗಂಟೆಯ ಸದ್ದು ಹೆಚ್ಚಿ
ದೂರದಲಿ ಕಿಡಿಗೇಡಿ ಬಾಲಕರು ಮೆಚ್ಚಿ
ದಶರಥನ ಶಬ್ದಭೇದದ ಬಾಣದಂತೆ
ಎಸೆಯುವರು ಕಲ್ಲುಗಳ ಗಣ್ ಕೇಳಿದಂತೆ.
ಕುಂಯ್ಗುಡುತ ಓಡುವುದು ನಾಯಿ ಹೌಹಾರಿ
ಪೂರ್ವಪುಣ್ಯದ ಬಲದಿ ಮನೆವರೆಗೆ ಜಾರಿ.

೪

ಪೂರ್ವಪುಣ್ಯದ ಬಲದಿ ಮನೆವರೆಗೆ ಜಾರಿ
ನಾಯಿ ತನ್ನೊಡೆಯನಾಶ್ರಯವನ್ನು ಸೇರಿ
ಬಿಕ್ಕುವುದು. ಒಡೆಯ ತಲೆ ತಟ್ಟುವನು. ಆಗ
ನೆನೆದೆಲ್ಲ ದುಃಖವನು, ತಡೆಯದಾವೇಗ-
ವನು, ಒಡೆಯನಡಿಯಲ್ಲಿ ಒರಗುವುದು ನಾಯಿ.
ಪ್ರೀತಿಯಲಿ ಒಡೆಯನವ ನಾಯಿಗಾ ತಾಯಿ.
ನಾಯಿಗಾದರು ಒಡೆಯನಲಿ ಬಹಳ ಪ್ರೀತಿ;
ಅದಕಾಗಿ ಬಿಕ್ಕುತ್ತ ತನ್ನ ಗೋಳನ್ನು
ನಾಯಿ ಹೇಳಿತು ಗಂಟೆಗಾದ ಬಾಳನ್ನು.

‘ ನನಗೀಗ ಈ ಗಂಟೆ ಬೇಡೆಂ’ದು ಬಿಕ್ಕಿ
ನಾಯಿ ಹೇಳಿತು ಅವನ ಮೈಗೆ ಮೈ ತಿಕ್ಕಿ.

೫

ನಾಯಿ ಹೇಳಿತು ಅವನ ಮೈಗೆ ಮೈ ತಿಕ್ಕಿ.
ಪ್ರೀತಿಯಲಿ ಒಡೆಯನವ ನಾಯಿಗಾ ತಾಯಿ
ನುಡಿದನತಿ ಕರುಣೆಯಲಿ ‘ ಎನ್ನ ಮಗು, ನಾಯಿ,
ನೀನಾವ ದುಷ್ಟಜನ ಸಂಗದೊಳು ಸಿಕ್ಕಿ?
ರಕ್ಷಕನು ನಾ ನಿನ್ನ ಪಾಲಕನು ನಿನ್ನ,
ನನ್ನ ಆಸರದಲ್ಲಿ ನಿನಗಿಲ್ಲ ಬನ್ನ!
ನನ್ನ ಬಾಳಿನ ಸೊಬಗಿನಲಿ ನೀನು ಚಿನ್ನ;
ರಕ್ಷಣೆಯ ಪಾಲನೆಯ ಪ್ರೀತಿಯಾ ಚಿಹ್ನ
ಎಂದು ಕಟ್ಟಿಹೆ ಗಂಟೆ ಕೊರಳೊಳಗೆ ನಿನ್ನ,
ಆ ಗಂಟೆ ಜಾರಿದರೆ ರಕ್ಷಿಸುವರಾರು?
ಆ ಗಂಟೆ ಬಾರಿಸದೆ ನನಗೆ ನೀನಾರು?’

\+ + +

ಇಂತು ನುಡಿದನು. ಗಂಟೆಯನು ತೆಗೆಯಲೊಲ್ಲ,
ನಮ್ಮೂರ ಕೇರಿಯಲಿ ನಾಯಿಯೊಂದಿಲ್ಲ!

# ಎಲ್ಲಾರು ಒಂದೇ!

( ಯಾತದ ರೀತಿಯಲ್ಲಿ )

ನಾ ಬ್ಯಾರಿ ನೀ ಬ್ಯಾರಿ । ಅನಬ್ಯಾಡ ನನ ಗೆಣೆಯ ।
ಎಲ್ಲಾರು ನಾವು ಒಂದೇ ॥ ಹೋ-ಹೋ-ಹೋ ॥

೧

ಗದ್ದೀಗ ಬೆಳೆಯಾಗಿ ॥ ಗದ್ದೀಗ ಬೆಳೆಯಾಗಿ-
ಕಣಜಕ್ಕ ಭತ್ತಾಗಿ
ಅಡಗೀಗ ಅಕ್ಕ್ಯಾಗಿ
ಊಟಕ್ಕ ಅನ್ನಾಗಿ
ಸಗತೀಗ ರಗತಾಗಿ ॥ ಹೋ ॥ ಸಗತೀಗ ರಗತಾಗಿ ॥
ಅದು ಬ್ಯಾರಿ ಇದು ಬ್ಯಾರಿ । ಅನಬ್ಯಾಡ ನನ ಗೆಣೆಯ
ಇದ್ದಾಗ ಎಲ್ಲಾ ಒಂದೇ ॥ ಹೋ-ಹೋ-ಹೋ ॥

೨

ಇಲ್ದಾಗ ಬರ್ತೈತಿ । ಠಕ್ತನ ಫಜೀತಿ ।
ಇದ್ದವ್ನ ಬ್ಯಾರೆ ರೀತಿ ॥ ಹೋ-ಹೋ-ಹೋ ॥
ಗದ್ದೀಗ ಲೆಕ್ಕಾಗಿ ॥ ಗದ್ದೀಗ ಲೆಕ್ಕಾಗಿ—
ಕಣಜಕ್ಕ ರೊಕ್ಕಾಗಿ
ಊಟಕ ಚೊಕ್ಕಾಗಿ ॥ ಹೋ ॥
ಇಲ್ದವ್ಗ ದುಕ್ಕಾಗಿ
ಗಂಟ್ಲಾನ ಸಿಕ್ಕಾಗಿ
ಸಾಲಕ ಪಕ್ಕಾಗಿ ॥ ಹೋ-ಹೋ-ಹೋ
ಇದ್ದವ್ಗ ಅದು ಗಂಟು । ಇಲ್ದವ್ಗ ಬರಿ ದಂಟು ॥ ಹೋ ॥
ಅವ ಬ್ಯಾರಿ ಇವ ಬ್ಯಾರಿ । ಅನಬ್ಯಾಡ ನನ ಗೆಣೆಯ
ಇಬ್ಬರು ಕೂಡಿ ಒಂದೇ ॥ ಹೋ-ಹೋ-ಹೋ ॥

‘ ನನಗೀಗ ಈ ಗಂಟೆ ಬೇಡೆಂ’ದು ಬಿಕ್ಕಿ
ನಾಯಿ ಹೇಳಿತು ಅವನ ಮೈಗೆ ಮೈ ತಿಕ್ಕಿ.

೫

ನಾಯಿ ಹೇಳಿತು ಅವನ ಮೈಗೆ ಮೈ ತಿಕ್ಕಿ.
ಪ್ರೀತಿಯಲಿ ಒಡೆಯನವ ನಾಯಿಗಾ ತಾಯಿ
ನುಡಿದನತಿ ಕರುಣೆಯಲಿ ‘ ಎನ್ನ ಮಗು, ನಾಯಿ,
ನೀನಾವ ದುಷ್ಟಜನ ಸಂಗದೊಳು ಸಿಕ್ಕಿ?
ರಕ್ಷಕನು ನಾ ನಿನ್ನ, ಪಾಲಕನು ನಿನ್ನ,
ನನ್ನ ಆಸರದಲ್ಲಿ ನಿನಗಿಲ್ಲ ಬನ್ನ!
ನನ್ನ ಬಾಳಿನ ಸೊಬಗಿನಲಿ ನೀನು ಚಿನ್ನ;
ರಕ್ಷಣೆಯ ಪಾಲನೆಯ ಪ್ರೀತಿಯಾ ಚಿಹ್ನ
ಎಂದು ಕಟ್ಟಿಹೆ ಗಂಟೆ ಕೊರಳೊಳಗೆ ನಿನ್ನ,
ಆ ಗಂಟೆ ಜಾರಿದರೆ ರಕ್ಷಿಸುವರಾರು?
ಆ ಗಂಟೆ ಬಾರಿಸದೆ ನನಗೆ ನೀನಾರು?’

+ + +

ಇಂತು ನುಡಿದನು. ಗಂಟೆಯನು ತೆಗೆಯಲೊಲ್ಲ,
ನಮ್ಮೂರ ಕೇರಿಯಲಿ ನಾಯಿಯೊಂದಿಲ್ಲ!

# ಎಲ್ಲಾರು ಒಂದೇ !

( ಯಾತದ ರೀತಿಯಲ್ಲಿ )

ನಾ ಬ್ಯಾರಿ ನೀ ಬ್ಯಾರಿ । ಅನಬ್ಯಾಡ ನನ ಗೆಣೆಯ ।
ಎಲ್ಲಾರು ನಾವು ಒಂದೇ ॥ ಹೋ–ಹೋ–ಹೋ ॥

೧

ಗದ್ದೀಗ ಬೆಳೆಯಾಗಿ ॥ ಗದ್ದೀಗ ಬೆಳೆಯಾಗಿ–
ಕಣಜಕ್ಕ ಭತ್ತಾಗಿ
ಅಡಗೀಗ ಅಕ್ಕ್ಯಾಗಿ
ಊಟಕ್ಕ ಅನ್ನಾಗಿ
ಸಗತೀಗ ರಗತಾಗಿ ॥ ಹೋ ॥ ಸಗತೀಗ ರಗತಾಗಿ ॥
ಅದು ಬ್ಯಾರಿ ಇದು ಬ್ಯಾರಿ । ಅನಬ್ಯಾಡ ನನ ಗೆಣೆಯ
ಇದ್ದಾಗ ಎಲ್ಲಾ ಒಂದೇ ॥ ಹೋ–ಹೋ–ಹೋ ॥

೨

ಇಲ್ದಾಗ ಬರ್ತೈತಿ । ಠಕ್ತನ ಫಜೀತಿ ।
ಇದ್ದವ್ನ ಬ್ಯಾರೆ ರೀತಿ ॥ ಹೋ–ಹೋ–ಹೋ ॥
ಗದ್ದೀಗ ಲೆಕ್ಕಾಗಿ ॥ ಗದ್ದೀಗ ಲೆಕ್ಕಾಗಿ—
ಕಣಜಕ್ಕ ರೊಕ್ಕಾಗಿ
ಊಟಕ ಚೊಕ್ಕಾಗಿ ॥ ಹೋ ॥
ಇಲ್ದವ್ಗ ದುಕ್ಕಾಗಿ
ಗಂಟ್ಲಾನ ಸಿಕ್ಕಾಗಿ
ಸಾಲಕ ಪಕ್ಕಾಗಿ ॥ ಹೋ–ಹೋ–ಹೋ
ಇದ್ದವ್ಗ ಅದು ಗಂಟು । ಇಲ್ದವ್ಗ ಬರಿ ದಂಟು ॥ ಹೋ ॥
ಅವ ಬ್ಯಾರಿ ಇವ ಬ್ಯಾರಿ । ಅನಬ್ಯಾಡ ನನ ಗೆಣೆಯ
ಇಬ್ಬರು ಕೂಡಿ ಒಂದೇ ॥ ಹೋ–ಹೋ–ಹೋ ॥

# ಬುದ್ಧಿ ಚಕ್ರ

ಮುಗಿಲು ಕರಗಿ ನೀರದಾಯ್ತು,
    ನೀರು ಕರಗಿ ಮುಗಿಲೆನಿಸಿತು;
ಮುಗಿಲು ಮೊದಲೊ? ನೀರು ಮೊದಲೊ?—
    ಯಾರಲಿ ಕೇಳುವೆನು ಮಾತು?

× × ×

ತನ್ನ ಒಡೆಯ ತಾನೆ ಎಂದು
ಮನುಜ ಬಾಳ ನಡೆಸುತಿದ್ದ;
ತನ್ನ ಮನೆಗೆ ತಾನೆ ನಿಂದು
ಸುಖ-ದುಃಖವ ನೋಡುತಿದ್ದ;
    ತನ್ನ ಶಕ್ತಿಯಂತೆ ಗಳಿಕೆ
    ತಾನೆ ಬಯಸಿದಂತೆ ಬಳಕೆ
    ಎನುತ ಚಿಕ್ಕ ದೊರೆಯೊಲಿದ್ದ.

× × ×

ಹೀಗೆ ಕಾಲ ಸರಿದು ಸಂದು
ಮನುಜ ಬೆಳೆದು ಬೆಳೆದು ಬಂದು,
ಎಷ್ಟು ಮನುಜರಷ್ಟು ದೊರೆ—
ಎಂಬ ಪರಿಸ್ಥಿತಿಯು ಬರೆ,
    ಒಬ್ಬೊಬ್ಬನ ಒಳಗಿನಂತ
    ಮತ್ತೊಬ್ಬನ ಕೆಣಕುವಂತೆ
    ಬೆಳೆಯಿತು; ಬೆಳೆಯಿತು ಅಶಾಂತಿ!

× × ×

ಈ ಸ್ಥಿತಿಯನು ನೋಡೆನೆನುತ
ಕೃಪಾವಂತ ಬುದ್ಧಿವಂತ
ಬಂದನೊಬ್ಬ ನರಸಿಂಹನು,
ಎಂದನಿಂತು ಹಿರಿನುಡಿಯನು:

‘ ನಿಂನಿವ್ಮೊಳು ಬೇಕಾಗುತ
ಇರದಿರಲು ಪ್ರಪಂಚ ಸಹಿತ
ಸಾಯ್ವಿರೆ’ಂದು ಗದರಿಸಿದನು.
× × ×
ಆ ಮಾತನು ಕೇಳಿದವರು
ಗುಂಪು–ಗುಂಪಿನಲಿ ನೆರೆದರು,
ತೂಗಿ ತಿಳಿದು ಬಗೆದು ಹೊಳೆದು
ದಿಟ ಎಂದರು, ಸರಿ ಎಂದರು—
‘ ನರಸಿಂಹನು ಇವನೆಂದೇ
ಇಂಥ ಮಾತ ನುಡಿದನಿಂದೆ
ಇಂದಿನಿಂದ ನಮ್ಮ ತಂದೆ!’
× × ×
ಅಂದಿನಿಂದ ನರಸಿಂಹನು
ತಂದೆಯಾದ; ಕಾಲ ಕಳೆಯೆ
ಹಿರಿಯನಾದ; ಭಕ್ತಿ ಬೆಳೆಯೆ
ರಾಜನಾದ; ಜನರು ಒಲಿಯೆ
ನಿಜವಾಗಿಯೆ: ನರಸಿಂಹನು
ಆಗಿ, ಬಲದ ಗರ್ಜನೆಯಲಿ
ಕೂಗಿ, ತನ್ನ ತರ್ಜನೆಯಲಿ
ಜನ ಕುಣಿಸಿದನು, ದಣಿಸಿದನು.
× × ×
ನರಸಿಂಹನು ಬುದ್ಧಿವಂತ
ತಮ್ಮ ಬಾಳ ಸೊಗಸಿನಂತ
ಬಲ್ಲನಾತ; ಎಂದು ಜನರು
ಮಬ್ಬಿನಲ್ಲಿ ಮೈಮರೆದರು.
ಉಡಲುಣ್ಣಲು ಸಾಕನಿತಿದೆ
ಬಡತನವದು ಕನಸಾಗಿದೆ
ಹೆಚ್ಚಿಗೇನು ಬೇಕೆಂದರು.
× × ×

ಇನ್ನೊಬ್ಬನು ಬುದ್ಧಿವಂತ
ಆಗ ಜನರ ಮುಂದೆ ಬಂದ
ದನಿಯ ತಿರಸ್ಕಾರದಿಂದ
ಹೀಗೆಂದನು ಕೆಣಕುವಂತೆ

‘ಅವನ ಸುಖವೆ ನಿಮ್ಮ ಸುಖವು
ಅವ ನುಡಿದುದೆ ನಿಮ್ಮ ಗತಿಯು
ಜೀವವಿಲ್ಲದೆಂಥ ಬಾಳು!’

× × ×

ಕೇಳಿದೊಡನೆ ಆ ಮಾತನು
ಕೆಲರು ತುರಿಸಿದರು ತಲೆಯನು;
ಎಣಿಕೆ ಹಾಕಿ ತೂಗುತದನು
ಅಹುದೆಂದರು ಭಲೆ ಎಂದರು.

ನರಸಿಂಹನ ಹೊಡೆದೋಡಿಸಿ
ತಮ್ಮವರನು ಬರಗೂಡಿಸಿ
ಸುಖಕೆ ದಾರಿ ಇದು ಎಂದರು.

× × ×

ಹೀಗೆ ಕಾಲ ನಡೆದು ಹೋಗೆ
ತಮ್ಮವರೇ ಹಿರಿಯರಾಗೆ
ಎಷ್ಟು ಹಿರಿಯರಷ್ಟು ದೊರೆ
ಎಂಬ ಪರಿಸ್ಥಿತಿಯು ಬರೆ

ಹಿರಿಯನೊಬ್ಬನೊಳಗಿನಂತ
ಮತ್ತೊಬ್ಬನು ಕೆಣಕುವಂತೆ
ಬೆಳೆಯಿತು; ಬೆಳೆಯಿತು ಅಶಾಂತಿ!

× × ×

ಈ ಸ್ಥಿತಿಯನು ನೋಡೆನೆನುತ
ಕೋಪದೊಡನೆ ದನಿಯೇರುತ
'ಹೇಳುವೆ ನಿಮಗಿದರ ಅರಿತ'
ಎನುತೊಬ್ಬನು ಹಿಡಿದು ನುಡಿದ;

'ನಮಗಿಲ್ಲವು ನಮ್ಮ ಬುದ್ಧಿ,
ಅದಕೆ ಬಿಡದು ನಮಗೆ ಗುದ್ದಿ,
ತಪ್ಪಿಸಿರೀ ದಾಸ್ಯ ದುಡಿತ!

× × ×

ಅಂದಿನಿಂದ ಬುದ್ಧಿ ಎಂದ-
ರೇನು ಎಂದು ಕಾದು ನಿಂದ
ತಂಡ ತಂಡ ಇದಿರು ಬಂದು
ಮನುಜಬುದ್ಧಿ ಬಲಿಯಿತೆಂದು

ಎದ್ದನೊಬ್ಬ ಧೈರ್ಯವಂತ;
'ಬುದ್ಧಿ-ಗುದ್ದಿ ಸಾಕು' ಎಂದ
'ನಮ್ಮಿಷ್ಟಕೆ ನಾವು' ಎಂದ.

× × ×

'ತನ್ನ ಒಡೆಯ ತಾನೆ ಎಂದು
ಮನುಜ ಬಾಳ ನಡೆಸಲೆ'ಂದ;
ಮುಗಿಲು ಕರಗಿ ನೀರದಾಯ್ತೆ?
ನೀರು ಕರಗಿ ಮುಗಿಲದಾಯ್ತೆ?

ಮುಗಿಲು ಮೊದಲೊ? ನೀರು ಮೊದಲೊ?
ನಾನು ಮೊದಲೊ? ನೀನೊ? ಎಂದು
ಕೇಳಿ ಕೇಳಿ ದಣಿದೆನಿಂದು.

# ಜಾರುವುದು--ಜಾರುವುದು

೧

ಜೀವನವೆಂಬುದು
ಜಾರುಗುಂಡಿಯದು,
ಜಾರುವ ದಿಟ್ಟನ
ಗಟ್ಟಿ ಮಾಡುವುದು,
ಜಾರದ ಪುಕ್ಕಗೆ
ಪೆಟ್ಟನುಂಡೆಯದು;
ಜಾರಲು ಬರಲಿ
ಬಾರದೆ ಇರಲಿ
ಜಾರುವುದು
ಜಾರುವುದು,
ಜಗ್ಗನೆ
ಜರ‍್ರನೆ
ಜಾರುವುದು !

೨

ನೂರಾಯುಷ್ಯದ
ಪೂರಾ ಎತ್ತರ
ಜಾರುಗಟ್ಟಿಯಲಿ
ಹುಟ್ಟಿದರೆಲ್ಲರು
ಜಾರಜಾರುವರು
ಜಾರಿದರೆಲ್ಲರು
ಏರ ಏರುವರು
ಮತ್ತೆ ಜಾರುವರು,
ಜಾರಲು ಬರಲಿ
ಬಾರದೆ ಇರಲಿ
ಜಾರುವುದು
ಜಾರುವುದು,
ಜಗ್ಗನೆ
ಜರ‍್ರನೆ
ಜಾರುವುದು!

೩

ನಕ್ಕು ನಲಿಯುತಲಿ
ಜಾರುವುದುಂಟು,
ಪುಕ್ಕರ ಎದೆಯದು
ಹಾರುವುದುಂಟು,
ಬೀಳದೆ ಜಾರುವ
ಬಂಟರು ಇಹರು,
ಬಿದ್ದರು ನಗುತಿಹ
ತುಂಟರು ಇಹರು;
ಬೀಳದೆ ಇರಲಿ
ಬಿದ್ದು ತೀರಲಿ
ಜಾರುವುದು
ಜಾರುವುದು
ಜಗ್ಗನೆ
ಜರ‍್ರನೆ
ಜಾರುವುದು!

೪

ಜಾರುಗುಂಡೆಯಲಿ
ಏರಾಟವು ಇರೆ
ಒಬ್ಬ ಜಾರುತಿರೆ
ಇನ್ನೊಬ್ಬನು ಬರೆ,
ಮೊದಲಿನ ಮರಳನು
ಉರುಳುತ ಬರುತಿರೆ,
ನಂತರ ಬಂದವ
ಮೇಲೆ ಮುಗ್ಗುತಿರೆ,
ಬದಿಗೆ ಸರಿಯಲಿ
ತಪ್ಪಿಸದಿರಲಿ
ಜಾರುವುದು
ಜಾರುವುದು
ಜರ್ರನೆ
ಜಗ್ಗನೆ
ಜಾರುವುದು!

೫

ಜೀವನವೆಂಬುದು
ಜಾರುಗುಂಡಿಯದು
ಜಾರುವರೆಲ್ಲರು
ಏರದೆ ಇದ್ದರು
ಮೇಲ್ನುಗ್ಗಿದವರು
ಮೆತ್ತನೆ ಕಂಡರು
ಕೆಳ ಮುಗ್ಗಿದವರು
ಮಣ್ಣನೆ ಉಂಡರು
ತಪ್ಪದು ಜಾರಿಕೆ;
ಎಲ್ಲರ ಪಾಲಿಗೆ
ಇಲ್ಲವು ಏರಿಕೆ.
ಏರಿಕೆ ಇರಲಿ
ಇಲ್ಲದೆ ಇರಲಿ
ಜಾರುವುದು
ಜಾರುವುದು
ಜಗ್ಗನೆ
ಜರ್ರನೆ
ಜಾರುವುದು!

# ರಂಗನ ಕುದುರೆ

೧

ಮಂಗನೂರಿನಾ
ರಂಗನ ಸೆಟ್ಟಿ
ಮನೆಯೊಳಗೊಂದು
ಟಾಂಗಾ ಕಟ್ಟಿ
ಆ ದಿನ ಕುದುರೆಯು
ಬೆನ್ನನು ತಟ್ಟಿ
ಹೊರಟನು ಮೆರೆಯಲು
ಪುಕ್ಕಟ್ಟೆ.
ಹೊರಡಲು ಸದರೀ
ರಂಗನ ಕುದುರಿ
ಭಂಗನೆ ಬೆದರಿ
ಟಾಂಗಾ ಮುದುರಿ
ಉರುಳಿದ ರಂಗನು
ನೆಲ ಕೆದರಿ.

೨

ರಂಗನ ಸೆಟ್ಟಿ
ಮನೆಯನು ಮುಟ್ಟಿ
ಕುದುರೀ ಕಟ್ಟಿ
ಹೊಡೆದನು ರಟ್ಟೆ-
ನೋವನಕ.
ರಂಗನ ಕುದುರಿ
ಹೊಡೆತಕೆ ಒದರಿ
ನಿಂತಿತು ಹೆದರಿ
ಕಾಲನು ಕೆದರಿ;
ಕೇಳಿ ಆ ದನಿ
ಬಂದಿತು ನೆರೆಮನಿ-
ಹಿರಿ ಕುದುರಿ.

೩

ನೆರೆಮನಿ ಕುದುರಿ
ತನ್ನಯ ಮೂಗಿಲೆ
ರಂಗನ ಕುದುರೆಯು
ಬೆನ್ನನು ಹೊಟ್ಟೆಯು
ಸವರಿತು. ಕಣ್ಣಲಿ
ತಂದಿತು ನೀರನು,
ಅಂದಿತು ರಂಗನ
ಕುದುರೆಗದು :

೪

'ತಮ್ಮಾ, ಕುದುರೀ,
ನಾನೂ ನೀನೂ
ಒಂದೇ ಮಾದರಿ.
ಆದರು ನೀನು
ಟಾಂಗಾ ಕುದುರಿ.
ನಿನ್ನಯ ಸೆಟ್ಟಿ

ತನ್ನಯ ರಟ್ಟೆ-
ವಣಿಸದೆ ಹೊಟ್ಟೆ
ಉಣಿಸುವನು.
ದುಡಿಯದೆ ಬಿಟ್ಟೆ
ಈ ಮನೆ ಕಟ್ಟೆ
ಹತ್ತದೆ—ಒಟ್ಟೇ
ಮನೆಯನು ಬಿಟ್ಟೇ
ಹೊರಹೊರಡು!

೫

ಸೆಟ್ಟಿಯ ಕುದುರಿ
ಪೆಟ್ಟು ತಿಂದುದಕೆ
*ಕಟ್ಟೆಯ ಕುದುರೆಯು
ಸಿಟ್ಟು ತಾಳುತ
ನೆಟ್ಟಗೆ ಬಂದಿತು
ಸೆಟ್ಟಿಯ ಮನೆಗೆ.
ಸೆಟ್ಟಿಯ ಮನೆಯಲಿ
ಕಟ್ಟಿದ ಕುದುರೆಗೆ
ಗುಟ್ಟನು ಹೇಳಿತು —
ಹೀಗ್ಹೀಗೆ:

೬

'ನಾನೂ ನೀನೂ
ಜಾತಿಯಲೊಂದೇ.
ನನ್ನದು ನಿನ್ನದು
ಒಂದೇ ಧಂದೇ.

---

* ಟಾಂಗಾ ನಿಲ್ದಾಣ

ನಮ್ಮೊಳು ಕೂಡದ
ಟಾಂಗೆಗೆ ಹೂಡದ
ನೆರೆಮನೆ ಘೋಡದ
ಮಾತು ಬಿಡು!
ಯಾರೂ ನೋಡದ
ಯಾರೂ ಆಡದ
ಯಾರೂ ಓಡದ
ಹಾಗೆ ನನ್ನ ಜೊತೆ
ಕೂತು ಬಿಡು!'

೭

ಆ ದಿನ ಬಿಟ್ಟು
ಮರುದಿನದಲ್ಲಿ
ಭಟ್ಟರ ತಟ್ಟು
ಬಂದಿತು ಅಲ್ಲಿ.
'ಹೋಗುವುದೆಲ್ಲಿ?'
ಎಂದಿತು ರಂಗನ
ಕುದುರೆಗೆ ಅಂಗಳದಿ.
'ನೆರೆಮನೆ ಕುದುರೆ
ದೈವುಳ್ಳದ್ದು,
ಎರಡನೆ ಕುದುರೆಗೆ
ಜಾತಿಯು ಜಡ್ಡು,
ನನಗೂ ನಿನಗೂ
ಹೊಟ್ಟೆಯ ಪಾಡು
ಹೇಗಿದೆ ನೋಡು?
ಯಾಕೀ ಕೇಡು?
ತೀರಿಸೆ ಸೇಡು

ಹೋಗುವ ನೋಡು"
ಎಂದಿತು ಭಟ್ಟರ
ಘನ ತಟ್ಟು

೮

ಮಂಗನೂರಿನಾ
ರಂಗನ ಸೆಟ್ಟಿಯು
ಅಂಗಳದಲ್ಲಿ
ರಂಗನ ಕುದುರೀ
ಟಾಂಗೆಯ ಕುದುರೀ
ನೆರೆಮನೆ ಕುದುರೀ
ತಟ್ಟೊ ಸೇರಿ
ವಾದಕೆ ಬಿದ್ದುವು
ಸಿಟ್ಟಿಗೆ ಎದ್ದುವು
ಕಾಲಿಲೆ ಒದ್ದುವು
ಒಂದನ್ನೊಂದು.
ಗದ್ದಲ ಕೇಳುತ
ಎದ್ದನು ರಂಗನು
ಸದ್ದನು ಮಾಡದೆ
ಕದ್ದನು ಮೂಲೆಯ
ಉದ್ದನ ಬಡಿಗೆಯನು.

೯

ಮಂಗನೂರಿನಾ
ರಂಗನ ಮನೆಯೊಳು
ಅಂಗಣದಲ್ಲಿ
ನಾಲ್ಕು ಕುದುರೆಗಳು
ಕುಣಿದುವು ದಣಿದುವು
ಹಿಂದಿನ ಕಾಲ್ಗಳ
ಹೊಟ್ಟೆಗೆ ಹೆಣೆದುವು.
ಆ ದಿನದಿಂದ
ಕುದುರಿಯು ಕುದುರಿ
ನೋಡಲು ಬೆದರಿ
ಉಳಿದುವು ಸದರೀ
ಮನೆಯೊಳಗೆ—
ಒಬ್ಬರು ಆಗದೆ
ಒಬ್ಬರಿಗೆ.

# ಬೆಳಗಿನ ಸೂರ್ಯ

ಎಲೆ ಸೂರ್ಯ,

ಚೇತನಾಚೇತನವ ಚೇತರಿಪ ಸವಿತೃ ಎನೆ
ಗಿಡ-ಬಳ್ಳಿ-ಮಿಗ-ಹಕ್ಕಿಗಳನು ನರ್ತಿಸಿ ನಲಿಸಿ
ಸೃಷ್ಟಿಗೆ ಚಿರಂತನದ ಎಳವರಯ ದಾತೃವೆನೆ
ಶರಣುವೋದನು ನಿನ್ನ ಋಗ್ವೇದ ಋಷಿ ಮುನ್ನ.

ಎಲೆ ಸೂರ್ಯ,

ಕಾಲವನು ಸೃಷ್ಟಿಸಿದ ಭಾಸುರಜ್ಯೋತಿ ನೀ
ಕಾಲದಾ ಮೇರೆಯನೆ ಮೀರಿ ನಿಂತಿಹೆ ಎಂದು
ಉಪನಿಷತ್ತಿನ ಬ್ರಹ್ಮಯೋಗಿಗಳು ಜಗಕೊಂದು
ಕಾರಣವ ಪೂರಣವ ಆತ್ಮವನು ಸಾರಿದರು.

ಇದೊ ಸೂರ್ಯ,

ಹೊಸ ಜಗಕೆ ಬೆರಗಾದ ಆರ್ಯಋಷಿ ನಾನಲ್ಲ,
ಒಳಗಣ್ಣ ಯೋಗಿಯಾ ಆಯುಷ್ಯವೆನಗಿಲ್ಲ,
ಬವಣೆ-ಬಳಲಿಕೆಗಳಲಿ ಮನ ಬೆಂದ, ಮೈ ದಣಿದ,
ಮದಮತ್ತ ಭೂಲೋಕಮಾರ್ತಾಂಡತಾಪದಲಿ
ಮಣಿದ, ಬೆಮರಿಲ್ಲವೆನೆ ಒಣಗಿದಾ ನರ ನಾನು;
ಎನ್ನ ಬೆಮರೊಡಿಸೆ ಮೂಡಿದ ರಕ್ತಹರ ನೀನು!

# ಕರೆಯುತಿಹಳು ಎನ್ನ

ಮುಗಿಲು ಬಣ್ಣದಾ ಹೆಣ್ಣು ಯಾವುದಿದು? ಕರೆಯುತಿಹಳು ಎನ್ನ,
ಬಗೆಯನರಳಿಸುತ ನಗಲಿಹ ಕಣ್ಣಿದು ಅರಸುತಲಿದೆ ಎನ್ನ!

೧

ಬರಿಮೈ-ಅಂದದಲಿ
ಇವಳು
ಸೊರಗಿದ ವಕ್ಷದಲಿ
ಮುತ್ತಿನ
ಸರಗಳ ತೆರದಲ್ಲಿ
ಸುರಿವುವೆ
ಹಿಮರ ಝುರಿಗಳಲ್ಲಿ? ।
ಸುತ್ತ ಗಿರಿಗಳನು ದರಿಯಲಿ ಸುಳಿಯುವ ನದಿಗಳೆ?-ಎನೆ ಚೆನ್ನ
ಓರೆಗಣ್ಣಿನಾ ಹೆಣ್ಣು ಯಾವುದಿದು?-ಕರೆಯುತಿಹಳು ಎನ್ನ!

೨

ಕರಿಮೈ-ಬಣ್ಣದಲಿ
ಇವಳು
ಸಿರಿತನವಿಹುದಿಲ್ಲಿ,
ಬಸಿರೊಳು
ಸ್ಫುರಿಸುತ್ತಿದೆ ಕೇಳಿ
ಜೀವನ-
ಸಂಪದ ಬಲಶಾಲಿ!

ಬರೆದು ಹಣೆಯಲಿದ, ಮಶಿಯಲಿ ಮರುಕದ, ಮನವ ಮುಟ್ಟುವನ್ನ
ಎನ್ನನೆಚ್ಚರಿಪ ಹೆಣ್ಣು ಯಾವುದಿದು ?–ಕರೆಯುತಿಹಳು ಎನ್ನ !

ಕಂದಿದ ಮೊಗದಲ್ಲಿ
ಹಿರಿಮೆಯ
ಹಿಂದನು ನೆನೆಯುತಲಿ
ಇವಳಾ
ಕಣ್ಣಿದು ಕುಣಿಯುತಲಿ
ನಗಲಿದೆ
ಮುಂದಿನ ಆಸೆಯಲಿ;

ಮರೆಯಿಪ ವೈಮನ, ಕೆರಳಿಪ ಶಕ್ತಿಯ ಮಾಯಾಸಂಪನ್ನ—
ಹೆಣ್ಣು ಯಾವುದಿದು? ಕಣ್ಣು ಯಾವುದಿದು?–ಕನ್ನಡ ನಾಡೆನ್ನ !

# ಪುರಾಣ-ಪ್ರಶ್ನೆ

( ಪುರಾಣ—? )

೧

ವ್ಯಾಸನು ಬರೆದನು ಭಾರತ ಕತೆಯನು,
ವಾಲ್ಮೀಕಿಯು ರಾಮಾಯಣವ;
ಸಾಸಿರವರ್ಷಗಳಾದರವುಗಳನು
ಬೇಸರವಿಲ್ಲದೆ ಸವಿಯುವ ನಿಮ್ಮನು
ಕೇಳುವೆನೆನ್ನಯ ಸಂಶಯವ:

೨

ಪಾಂಡವಘನತೆಗೆ ಕೌರವನೀಚತೆ
ತಳಹದಿಯಾಗಲು ಬೇಕಿತ್ತೆ ?
ಕಂಡಕಂಡ ಪಾಪಕೆ ಮನ ಸೆಳೆಯುತೆ
ಭಂಡನು ರಾವಣ ರಾಕ್ಷಸನೆನ್ನುತೆ
ರಾಮು ದೇವನೆನಬೇಕಿತ್ತೆ ?

೩

ದುಷ್ಟರದಾರು ? ಶಿಷ್ಟರದಾರು ?
ಪಾಪ-ಪುಣ್ಯ-ನಿರ್ಣಯವೆಂತು ?—
ಮುಷ್ಟಾಮುಷ್ಟಿಗೆ ನಿಂತವರೆಂದರು :
'ಶ್ರೇಷ್ಠನು ಗೆದ್ದವ, ಸೋತರೆ ದುಷ್ಟರು
ಕೆಳ-ತುಳಿವುದೆ ಮೇಲ್ಮೆಯದೆಂ'ದು.

೪

ಹುಟ್ಟುವ ಮಾನವ ಕೆಟ್ಟವನಿಹನೆ?
ಪಾಪವೆ ಬಾಳುವ ಆಸೆಯಿರೆ?
ಹುಟ್ಟಿದು ಬೆಳೆವುದೆ ಸೃಷ್ಟಿನಿಯಮವೆನೆ
ಹೊಟ್ಟೆಗಿಲ್ಲದಲೆ ಬಾಳಿನ ಬೆಳೆಯುನೆ
ತಡೆವವನೇ ಪಾತಕಿ ಎನರೆ?

೫

ಮಾನವಕೋಟಿಯು ಅಜ್ಞಾನದಲಿರೆ
ತಾನು ಸುಜ್ಞ ಎನುವುದು ಪಾಪ;
ಮಾನವಕೋಟಿಯು ಕೂಳಿಗೆ ಬಕ್ಕರೆ
ಕಾಣದೆ, ಬಡತನ ಬವಣೆ ಹಿಂಗದಿರೆ
ಸಿರಿ ತನ್ನದು ನರಕದ ಕೂಪ!

# ಅನ್ನ-ಸಂಸ್ಕೃತಿ

'ಅನ್ನದೇವರ ಮುಂದೆ ಇನ್ನು ದೇವರು ಇಲ್ಲ!'
ಎನ್ನುವಾ ಸಂಸ್ಕೃತಿಗೆ ಶರಣು ಶರಣು!

೧

ಅನ್ನವೇ ದೇವನೆನೆ ಅನ್ನಕ್ಕೆ ಗುಡಿ ಬೇಕು,
ಅನ್ನವನು ಕಲ್ಲಿನಲಿ ಇರಿಸಬೇಕು!
ಇನ್ನು ದೇವನ ಮೂರ್ತಿಯನ್ನು ಕಾಣಲು ಬರುವ-
ರನ್ನು ಒಳಬಿಡಲು ಪೂಜಾರಿ ಬೇಕು!

೨

ಮಾನವನ ಗರ್ಭದಲಿ ಭೇದಭಾವವ ಬಿಟ್ಟು
ಪ್ರಾಣವಾಗಿರುತಿರ್ದ ಅನ್ನದೇವ—
ಕಾಣದಾ ಕಲ್ಲುಕತ್ತಲೆಗರ್ಭಗುಡಿಯಲ್ಲಿ
ಲೀನನಾಗಿರಬೇಕು, ಎನಿಸೆ ದೇವ!

೩

ಗುಡಿಯ ಗುಂಭದಲಿದ್ದ ಈ ದೇವನನು ಕಾಣೆ,
ಅಧಿಕಾರವಿದೆ ಕಣ್ಣುಕಾಣದವಗೆ;
ನೋಡಿಸನೆ ಕಣ್ಣುಳ್ಳ ಪಾಪಿ ತಾ ಕತ್ತಲೊಳು
ನೋಡಲವ ಸುತ್ತಲಿದು ರಮ್ಯವಾಗೆ!
ಅನ್ನದೇವರ ಮುಂದೆ ಇನ್ನು ದೇವರು ಇಲ್ಲ
ಎನ್ನೆ ಈ ಸಂಸ್ಕೃತಿಯು; ಶರಣು ಶರಣು!

# ಸ್ವಾತಂತ್ರ್ಯವೇಕೆ ?



೧

ನಂಬುಗೆಯೆ ನಮಗಿಂದು ಕುರುಡುಗಣ್ಣಾಗಿಹುದು,
ಪರರ ಅವಲಂಬನವೆ ಊರುಗೋಲು,
ತಿಂಬುವುದನರಿಯದಲೆ ತಿರಿದುಕೊಳ್ಳಲು ಬಾಯಿ;
ಸ್ವಾತಂತ್ರ್ಯವೇಕೆಮಗೆ ?— ಕುರುಡು ಬಾಳು !

೨

ತಿಪ್ಪೆಯಲಿ ಕಸಗೂಡಿ ಬಿಸುಡಿದಾ ಕಾಳನ್ನು
ತಿಂಬ ಕೋಳಿಗೆ ಜಂಬವಿದೆ-ನೋಡಲು,
ನಮಗಿಲ್ಲ ಆ ಜಂಬ ದುಡಿದು ತಂದುದ ತಿಂದು
ಸ್ವಾತಂತ್ರ್ಯವೇತಕೆ ?–ಶಿಖಂಡಿ ಬಾಳು !

೩

ಮಾತುಮಾತಿಗೆ 'ದೇಶಮಾತೆ' ಎಂದೆನ್ನುವೆವು;
ಹೊಟ್ಟೆಹೊರೆಯುವ ಮಾತು ಮುಂದೆ ಬರಲು
ನೀತಿಯೆನೆ ಹೆಸರಿಟ್ಟು ಮಾತೆಯಳ ಮಾರುವೆವು
ಸ್ವಾತಂತ್ರ್ಯವೇಕೆ ?–ಮೈಗಳ್ಳ ಬಾಳು !

೪

ಗತಿಗೆಟ್ಟ ಬಡವನನು ಮತಿಗೆಟ್ಟ ತರುಣರನು
ಧೃತಿಗೆಟ್ಟ ಶ್ರದ್ಧಾಳುಗಳ ವಂಚಿಸಿ,
ಜಾತಿ–ಸಂಗಡ-ಪಕ್ಷಗಳನು ಕಟ್ಟುತ ಮೆರೆವ
ಮುಂದಾಳುಗಳಿಗೇಕೆ ಸ್ವಾತಂತ್ರ್ಯವು ?

# ನಗೆ-ಬಾಳು

ನಾಟಕವ ಬರೆದೆ, ನಗೆಯಾಟಗಳನಾಡಿಸಿದೆ,
ಕೀಟಕಗಳೆನೆ ಲೋಕಚರಿತ ದೋಷಗಳ ಉ-
ಚ್ಚಾಟನೆಗೆ ವೀಳ್ಯವನು ಎತ್ತಿದೆನು, ಅದು ಬರಿದೆ
ಮಾಟಗಾರಿಕೆಯಾಯಿತೆನಬಹುದೆ? ಭೂಮಿಯನು—
ಮಾನವನ ಹೃದಯದಲಿ ಯುಗಯುಗಾಂತರದಿಂದ
ಹುದುಗಿದಾತ್ಮವಿಕಾಸಶಕ್ತಿಗದು ತವರಾದ
ಭೂಮಿಯನು—ಉದ್ಧರಿಸೆ ಎತ್ತಿದಾ ಕೈ ರಂಗ-
ಭೂಮಿಯನೆ ಉದ್ಧರಿಸಿ ಕಳಚಿ ಕೆಳಗುರುಳಿದೆಯೆ?
ಮಾನವನ ಹೃದಯದಲಿ ಇಲ್ಲವೆ ಆ ಶಕ್ತಿ?
ಎನ್ನ ಹೃದಯವೆ ಎನ್ನ ಕೈಗೆ ಕೊಡದಾಯಿತೆ
ತನ್ನ ಕಳವಳವನ್ನು ಚಿತ್ರಿಸುವ ಆ ಯುಕ್ತಿ?

ನಗುವವನು ನಾನೆಂದು, ನಗಿಸುವವ ನಾನೆಂದು
ನಗೆಯಿಂದಲೆನ್ನ ಕಾಣಲು ಬಂದ ಈ ಜನದ
ಬಗೆಗೆ ಗೋಚರವಾಗಲಿಲ್ಲವೇ ತಮ್ಮ ಸೋ-
ಜಿಗದ ಬಾಳಿನ ಬಗೆಯೆ ನಗೆಗೆ ಕಾರಣವೆಂದು?
ತಿಳಿಯದಲೆ ನಗುವವರ ನಗಿಸಿ ತಿಳುಹಿಸಬಯಸಿ
ತಿಳಿಗೇಡಿಯೆ—ಇಲ್ಲ—ನಗೆಗೇಡಿಯೆ ನಾನು?
ತಿಳಿಯದಲೆ ನಗುವವರೆ ಬಾಳಗೇಡಿಗಳೇನು

# ಅನಾದಿಕವಿ

ಆದಿಕವಿ ವಾಲ್ಮೀಕಿ; ಹಕ್ಕಿಯೆರಡರಲಿ ಒಂ-
ದನು ಭೇದಿಸಿದ ಬೇಡ ಎಂದು ಬರೆದನು ರಾಮ-
ಸೀತೆಯರ ಕತೆಯನ್ನು. ರಾಮನೆಂಬುದು ಹಕ್ಕಿ,
ಸೀತೆ ಇನ್ನೊಂದು; ಅಗಲಿಸಿದನವುಗಳನು ರಾ-
ವಣನು ಬಂದು; ಅವ ಬೇಡ ಎಂದನು ವಾಲ್ಮೀಕಿ.
ಜೀವವೆಂಬುದು ಹಕ್ಕಿ, ದೇಹ ಇನ್ನೊಂದು. ಅವು
ಗಳನಗಲಿಸಿವೆ ಇಂದು ದಾಸ್ಯ-ದಾರಿದ್ರ್ಯಗಳು,
ಅಜ್ಞಾನವಂಜಿಕೆಯು, ಅಂಧಶ್ರದ್ಧೆಯ ಬಾಳು,
ಅರ್ಥಮದವುತ್ತ ಪರವಿತ್ತಹರರೆಣಿಕೆಗಳು;
ಈ ಬೇಡ–ತಂಡವನು ಖಂಡಿಪ ಅನಾದಿ ಕವಿ
ಎಲ್ಲಿ ಹುದುಗಿಹನೆಂಬುದನ್ನು ತೋರುವನೆ ರವಿ ?

# ರವಿಗಿಂತ ಕವಿ ಮೇಲು

೧

ರವಿಯು ಕಾಣದುದನ್ನು ಕವಿಯು ಕಾಣುವನೆಂದು
ಸವಿಮಾಡಿ ಹೇಳುತಿದೆ ಕವಿಸಮಯವು;
ಸವಿಮಾಡಿ ಹೇಳುತಿಹ ಕವಿಸಮಯವಿರೆ ಅದರ
ನೆವಮಾಡಿ ಹೇಳುವುದು ಕವಿಜಾತಿಯು,

ನೆವಮಾಡಿ ಹೇಳುವುದು,
ಸವಿಮಾಡಿ ಹೇಳುವುದು,
ರವಿ ಕಾಣದಾ ರಾತ್ರಿ-
ಯಲ್ಲಿ ಪ್ರೇಮದ ಜಾತ್ರೆ-
ಯೊಳು ನೆರೆವ ಗೆಣೆ-ಗೆಣತಿ-
ಯರು ಮಾಳ್ಪ ಸರಸ-ರತಿ-

ಗಳನೆ ಅನುಭವ ಮಾಡಿ ಹಾಡಿ ಸವಿ ಮಾಡುವುದು,
ಕವಿಸಮಯ ಜಯಭೇರಿಯನೆ ಹೊಡೆವುದು!

೨

ರವಿಯು ಕಾಣದುದನ್ನು ಕಿವಿಯು ಕೇಳಲು ಬೇಕು,
ಕಿವಿ ಕೇಳಿ ಕವಿಯು ಕಿವಿಯಾಗಬೇಕು;
ಕವಿಯ ಕಿವಿ ರಸದ ಗವಿ, ವಿವಿಧತೆಯನವನೆ ಅನು-
ಭವಿಸಬಲ್ಲನು ಎಂದು ತಿಳಿಯಬೇಕು;

ಇದನೆಲ್ಲ ತಿಳಿದವನೆ,
ಎತ್ತರದ ಉಪ್ಪರಿಗೆ
ಐಸಿರಿಯ ಚತ್ತರಿಗೆ
ಇವುಗಳಾಸರ ಮರೆಗೆ
ನಡೆವ ಸಿರಿವಂತಿಕೆ
ಮೃದು ಹಾಡುಗಾರಿಕೆ–
ಗಳನೆ ಸವಿಮಾಡಿ ಕವಿ ಹಾಡುವನದೇಕೆಂದು
ತಿಳಿಯುವುದು. ಅವುಗಳನು ಕಾಂಬನೆ ರವಿ?

[illegible]

ರವಿಯು ಕಾಣದುದನ್ನು ಕವಿ ಕಾಂಬನೆಂದರೆಯೆ
ರವಿಗಿಂತ ಕವಿ ಮೇಲು ಎಂದಾಗದೆ?
ರವಿಗಿಂತ ಕವಿ ಮೇಲೆ; ಅವರುಗಳ ತೂಗಾಡೆ,
ಕವಿ ನೋಟ ಮೇಲೆ, ರವಿ ಕೆಳಗೆ ನೋಡೆ.
ಕವಿನೋಟ ಮೇಲೆಯಿರೆ
ಕೆಳಗಿನಾ ಬಾಳಿನುರಿ-
ಕಾಟ-ಕಷ್ಟಗಳ ಹೊರೆ
ಇದು ತಡೆಯದಾಗೆ ಸುರಿ-
ಯುವ ಕಣ್ಣ-ನೀರ ಝುರಿ-
ಯಲಿ ಬಡವ ಹೌಹಾರಿ
ತೇಲುವುದ ತೊಳಲುವುದ ತಪ್ಪದಲೆ ಬಳಲುವುದ
ಕವಿ ಕಾಣ. ರವಿಗೆ ಕಾಣುವುದದೆಂದು.

# ಮಾಣದು ನಂಬುಗೆ!

೧

‘ದೇವನ ನಂಬಿರೊ’ ಎಂದರು ಕೆಲರು,
‘ಧರ್ಮವ ನಂಬಿರೊ’ ಎಂದರು ಕೆಲರು ಬೇರೆಯ ಬಲ್ಲವರು;
ನಂಬಿದ ದೇವನು ಕಾಣಿಸಲಿಲ್ಲ,
ರೆಂಬೆಯಲೊಡೆಯುತ ಬದುಕಲೆ ಇಲ್ಲ ಧರ್ಮವು ನಂಬಿದರೂ.

೨

ದೇವನು ಧರ್ಮವು ಮಾಯವಾದುವು,
ಸಾಯದೆ ಉಳಿಯಿತು ನರಗೆ ನಂಬುವಾ ಹೃದಯದ ಭಾವನೆಯು.
ದೇವನಿಲ್ಲದಿರೆ ಗೂಢಗುಂಭದಾ
ರೂಢಿಯ ನೇತಾರನ ನಂಬಿದನು; ಮಾಣದು ನಂಬುಗೆಯು.

೩

ಶಾಸ್ತ್ರವನೊಪ್ಪಿದ, ಧರ್ಮ ತಪ್ಪಲು;
ತಪ್ಪದು ನಂಬುಗೆ ಎನೆ ಅಪ್ಪಿದನು ಸಂಪ್ರದಾಯವನ್ನು;
ಶಾಸ್ತ್ರವು ರೂಢಿಯು ಸಾಲವು ಎನಿಸೆ,
ಒಪ್ಪುವ ಬುದ್ಧಿಯನವಲಂಬಿಸುತ ನಿಂತಿಹ ನೋಡಿನ್ನು.

೪

ನಂಬುಗೆ ಇಲ್ಲದೆ ನಡೆಯದೆ ಬಾಳು?
ನಂಬಿನಂಬಿದರು ಜೀವನ ಹಾಳು; ಅಳಿಯದಿಹುದು ಗೋಳು!
ಕೊಂಬೆಯಿಂದ ಕೊಂಬೆಗೆ ತಾ ಕೋತಿ
ಹಾರುವ ತೆರದಲಿ, ನಂಬುಗೆ ನರನನು ಹಾರಿಪುದೇ ಸಂಸ್ಕೃತಿ!

# ಇಲಿಗಳ ಸಭೆಯದು

೧

ಯುದ್ಧೋತ್ತರದಲಿ ಸದ್ಯಃಸ್ಥಿತಿಯನು
ತಿದ್ದಿ ಪುನರ್ರಚಿಸುವುದೆಂದು
ಬುದ್ಧಿವಂತ ಇಲಿಗಳು ಕೂಡಿಸಿದುವು
ಸಿದ್ಧತೆಯಲಿ ಸಭೆಯನ್ನೊಂದು.

೨

ಇಲಿಗಳ ಸಭೆಯದು, ಕಲಿಗಳದಲ್ಲಾ
ಭಲೇ ಭಾಪು ಎನುವವರಿಲ್ಲ;
ಕೆಲಸವಾವುದೆನೆ ನೋಡಿ ಮಾಡುತಲಿ
ಬಿಲ ಸೇರುವ ಇಲಿಗಳೆ ಎಲ್ಲ.

೩

'ಮನುಜನ ಕದನದ ವಧೆಯ ಪ್ರಮಾಣವು
ಯಮರಾಯನ ಮೀರಿದೆ ಎಂದು
ನರಪ್ರಾಣಿ ಸಂಪೂರ್ಣ ನಾಶವಾ-
ದರೆ ಗತಿ ನಮಗೇನೆನೆ', ಒಂದು;

೪

'ಉಳಿದರೆ, ಮಾನವ ಸೊಕ್ಕು ತುಂಬುತಲಿ,
ಉಕ್ಕಿನ ಗಚ್ಚಿನ ಸಿಮೆಂಟಿನಾ
ಮನೆಯ ಕಾರಖಾನೆಯ ಕಟ್ಟುವನೆನೆ
ನಮಗಿದು ಸಮಸ್ಯೆ ಇನ್ನೊಂದು.'

೫

ಎರಡು ಪ್ರಶ್ನೆಗಳ ಸಭೆಯ ಮುಂದಿಡುತ
ಸ್ವಾಗತ–ಇಲಿಯದು ಚಿಂವ್ ಎಂ
‘ತ್ವರಿತದಿ ತೊಡಕನು ಬಿಡಿಸಲು ಹಲ್ಲಸು
ಕಡಿಯಿರಿ’ ಎಂದಿತು ನೆಲ ಕೆದರಿ.

೬

ಅಧ್ಯಕ್ಷಿಲಿ ತಾ ಹಿರಿಯನು ಎಂದು
ಎತ್ತರ ಕಾಳಿನ ಚೀಲದಿ ನಿಂದು
ಪ್ರಶ್ನೆಗಳನು ಚರ್ಚಿಸಿ ಒಂದೊಂದು
ಶತಮಾನದ ಯೋಜನೆಯಿಟ್ಟ.

೭

‘ಮಾನವ ಸಂಸ್ಕೃತಿ ಅಳಿಯಲಿ ಇಲ್ಲವೆ
ಬೆಳೆಯಲಿ ಪುನರ್ರಚಿತವಾಗಿ,
ಏನೇ ಆದರು ನೂರು ವರುಷಗಳ
ಯೋಜನೆ ಬೇಕಿದು ನನ್ನ ಮತ.

೮

‘ಮಾನವ ಸಂಸ್ಕೃತಿ ಅಳಿದರು ಬೆಳೆದರು
ಒಬ್ಬರೊಬ್ಬರೊಳು ನಂಬುಗೆಯು
ನೂರು ವರುಷ ಪರಿಯಂತ ಬಾರದದು;
ನಮಗಿದು ಯೋಜನೆ ತಳಹದಿಯು.

೯

‘ವಿತ್ತದ ಸಂಚಯು ನಾಡಿನ ಏಳ್ಗೆಗೆ
ಅಗತ್ಯ ಎಂದೇ ಎನ್ನುವರು;
ದೇಶದೇಶದಲಿ ಸಂಚಯುವಿರುತಿರೆ
ವಿಶ್ವವೆ ಇಲಿಗಳ ಸಾಮ್ರಾಜ್ಯ!

೧೦

‘ಕಟ್ಟಲಿ ಮನೆಗಳ ಕಾರಖಾನೆಗಳ,
ನಾಗರಸಂಸ್ಕೃತಿ ಬೇಡೆಮಗೆ;
ಹೋಗುವ ನಾವು ಹಳ್ಳಿ-ಹಳ್ಳಿಗಳ
ತಳಹದಿಯಾಗಲು ಜೀವನಕೆ.

೧೧

‘ಇಲಿಗಳು ನಾವು, ಮರೆಯುವ ಬೇಡ,
ನೆಲವಿರೆ ಬಿಲಗಳ ಮಾಡುವೆವು,
ನೆಲದೊಳು ಬುದ್ಧಿಯ-ಬಲದಿಂ ನೆಲಸಲು
ಚಿರಭೋಗಕೆ ನಮಗಧಿಕಾರ.’

೧೨

ಇಲಿಗಳ ಸಭೆಯದು; ಈ ಹೆದರಿಕೆಯಲಿ
ಕಾಗದಪಂಡಿತರಿರಲಿಲ್ಲ;
ಸ್ವಾಗತ-ಇಲಿ ಅದಕಾಗಿ ಹೇಳಿಕೆಯ
ಕೊಟ್ಟಿತು; ಕಾವ್ಯದಿ ಕಟ್ಟಿರುವೆ.

# ಸ್ವಾತಂತ್ರ್ಯ

ನಲವತ್ತು ಕೋಟಿ ನರಹುಳುಗಳೀ ದೇಶವನು
ದಾಸ್ಯದಿಂದುದ್ಧರಿಪೆನೆಂಬನೊರ್ವನು ವೀರ;
'ನಶ್ವರವಿಮೋಚನೆಯು ನಮಗೆ ಬೇಡೀ ಕ್ರೂರ
ಬಲವಂತ ಧನವಂತಿಕೆಯ ಪಾಶಬದ್ಧರನು
ಬಿಡಿಸುವೆವು ಬಡವರನು', ಎಂಬನೊಬ್ಬನು ಧೀರ;
ಹರಿಜನೋದ್ಧಾರವೇ ದೇಶಸ್ವಾತಂತ್ರ್ಯವೆನೆ
ಮೂರನೆಯ ಮತಸಾರ. ತಂತಮ್ಮ ಜಾತಿಯನೆ
ನಾಡೆಂದು ತಿಳಿಯುವುದು, ಎಂಬೊಬ್ಬ ನೇತಾರ!

ಇದು ಭಾರತದ ಕರ್ಮ, ದಾಸ್ಯ ಕಲಿಸಿದ ಧರ್ಮ;
ತಿಳಿಯದಿವರಿಗೆ ತಮ್ಮ ಸ್ವಾತಂತ್ರ್ಯದಾ ಮರ್ಮ.
ಅಳಿಯಬಹುದೇ ದಾಸ್ಯ ಹೊರಗಣನುಭವದಿಂದ?
ಯಾರಿಗಿದೆ ಸ್ವಾತಂತ್ರ್ಯ ಮನದೊಳಿರೆ ಸ್ವಚ್ಛಂದ?
ದೇಹದಳತೆಗೆ ಬುದ್ಧಿ ಸಂಕುಚಿತವಿರೆ ದಾಸ್ಯ,
ವಿಶ್ವದಳತೆಗೆ ಹೃದಯ ವಿಸ್ತರಿಸೆ ಸ್ವಾತಂತ್ರ್ಯ.

# ಕವಿಗೆ

ಗತಿಗಾಣದಾ ಕೋಟಿಬಾಂಧವರ ಬಂಧುವೆನೆ
ನಿಖಿಲಭಾರತದ ವಿಸ್ತಾರಕೆ ಮಹಾತ್ಮನಿರೆ,
ಸುಖ-ದುಃಖಗಳ ಬಿಟ್ಟು ದೇಶಸೇವೆಯ ತೊಟ್ಟ
ಪ್ರತಿಮೂಲೆ-ಮೂಲೆಯಲಿ ದೇಶಭಕ್ತರ ಬೇನೆ;
ಇತ್ತ ಬುದ್ಧಿಗೆ ಕೊಟ್ಟು ಶಿಸ್ತು-ಶಿಕ್ಷಣಗಳನು
ವಿತ್ತ-ಪುರಸೊತ್ತುಗಳ ಸಕಲರಿಗೆ ಸಮನಾಗಿ
ದೊರೆಕಿಸಲು ಹೆಣಗುತಿಹ ಸಾಮ್ಯವಾದದ ತಂಡು;
ಸ್ವಾರ್ಥ-ಸವಿಮಾತುಗಳ 'ಮುಂದಾಳು'ಗಳ ದಂಡು.

ಅಕ್ಷೋಹಿಣಿಗಳೀ ಪ್ರಚಂಡಬಲಶಕ್ತಿಯ ಸ-
ಮಕ್ಷದಲಿ ನನಗಿನ್ನು ಗತಿಯದಾವುದು ಎಂದು,
ಮತಿಯು ತೋಚುವುದೆಂತು ಎಂದಳುಕದಿರು, ಕವಿಯೆ;
ಧೃತಿಯಿಂದ ನಿಲ್ಲವಲೆ ಆಗದೆಂದೆನ್ನುವೆಯೆ?
ನಿನ್ನ ನೀ ತಿಳಿದಲ್ಲಿ ಮಾನವತೆ ನಿನ್ನೊಳಿದೆ,
ನಿನ್ನ ಮರೆತನ್ಯರನು ಅರಿವ ದಿವ್ಯತೆಯು ಇದೆ!

# ಕವಿಯ ಭಿಕ್ಷೆ

ಭವತಿ ಭಿಕ್ಷಾಂ ದೇಹಿ ಎಂದು ಕೈ ನೀಡಿದನು
ಕವಿಯು ಮಾತೆಗೆ; ತಾಯಿ ವೈದಡವಿ ನಸುನಕ್ಕು
'ಹಿಡಿ' ಎನ್ನೆ, ಕವಿ ಕಂಡ:– ವಿದ್ಯೆಯ ಹಿಮಾದ್ರಿಯನು,
ಕರುಣೆಯ ಸಮುದ್ರವನು; ಮಧ್ಯದಲಿ ಜೀವಕಳೆ-
ಯುನೆ ತುಂಬಿ ರಕ್ತನಾಳಂಗಳೆನೆ ಹರಿಯುತಿಹ
ನದಿಗಳನು; ಎದೆಯ ಕಣಿಗಳಲಿ ಸಂಪದಗಳನು;
ಮಳೆಯಿಂದ ನಳನಳಿಪ, ಬೆಳೆಯಿಂದ ಕಳಕಳಿಪ,
ತರುಲತಾಫಲಪುಷ್ಪವಿಸ್ತರದ ಭೂಮಿಯನು.

ಜೀವವಿದ್ಯೆಗಳ ಭಿಕ್ಷೆಯ ನೀಡಿದಾ ತಾಯಿ,
ನಿಂತು ನಿನ್ನಿದಿರು ಒರಲುವಳು 'ಭಿಕ್ಷಾಂ ದೇಹಿ'.
ಏನ ನೀಡುವೆ, ಕವಿಯೆ? ಅಜ್ಞಾನಹಿಮಗಿರಿಯ ?
ಬಡತನದ ಸಾಗರವ? ಶತ-ಶತಾವಧಿಜಾತಿ-
ಝುರಿಗಳಲಿ ಹರಿವ ವೈಷಮ್ಯ? ಇದಕೆಲ್ಲ ಸರಿ
ನಿನ್ನ ಅಂತಃಕರಣ. ಕೊಡು ಅದನೆ ತೂಕದಲಿ!

# ಆಹ್ವಾನ

ಜಾರಿದನು ದೇವ; ಕಳಚಿತು ಧರ್ಮ; ಸ್ಮೃತಿಸದಾ—
ಚಾರಪಾರಂಗತರ ಹಿರಿತನದ ಅನುಭವದ
ಸಾರವದು ಸೇರಿತ್ತೈ ಕಾಲಜಾಲವ; ಖಡ್ಗ-
ಧಾರಿಗಳು, ದುಷ್ಟನಿಗ್ರಹ-ಶಿಷ್ಟರಕ್ಷಣೆಗೆ
ಹೋರಾಡಿದವರು, ಹತರಾದರಾಹುತಿಯಾಗಿ.
ಮೀರಿ ನಿಂತಿಹನಿಂತು ಮಾನವನು. ಸಕಲ ಸಂ-
ಸಾರ ಧಾರಕ ಶಕ್ತಿಗಳ ಮೀರಿ ನಿಂತು ತನ-
ಗಾರು ದೊರೆ ಎನುತಿಹನು, ದೂರ ಸಿಡಿದಿಹನು.

ಸುಖ-ಶಾಂತಿ-ಸ್ವಾತಂತ್ರ್ಯ-ನೀತಿ-ಸಂಪತ್ತುಗಳು
ಮುಖ ಮುಚ್ಚಿಕೊಂಡಿಹವು. ಇಂದು ಮನುಮನುಜರೊಳು
ಹಗೆತನವು ಸುರಿಯುತಿದೆ; ಕಾರುತಿದೆ ಉರಿನೆಲವು
ಬಗೆಯನಪ್ಪುತ ಮುಸುಕಿ ಹಿಸುಕುತಿಹ ವಿಷವಾಯು.
ನರ ರಜ್ಜು; ಶರಧಿ ಸಂಸಾರ; ಇದು ಮಂಥನ;
ಹರನಾಗಿ ಕುಡಿ ಗರಳ, ಇದೊ! ಕವಿಯೆ, ಆಹ್ವಾನ!

# ಓದುಗರಲ್ಲಿ

ಕವಿತೆಯನ್ನು ನಾನು ಬರೆದುದು ಇದೇ ಮೊದಲ ಸಲವಲ್ಲದಿದ್ದ
ಬರೆದ ಕವಿತೆ ಪ್ರಕಟನೆಗೆ ಅರ್ಹವಾದುದು ಎಂದು ನನಗೆ ನಾನೇ ಶಿಫಾ
ಪತ್ರವನ್ನು ಕೊಟ್ಟುದು ಮಾತ್ರ ಇದೇ ಮೊದಲ ಬಾರಿ. ಪದ್ಯ ಮ
ಗದ್ಯ ಶೈಲಿಗಳು ಒಂದು ದೃಷ್ಟಿಯಿಂದ ಬೇರೆ ಬೇರೆ ಎನಿಸಿದರೂ, ಪದ್ಯ ಬರೆ
ಗದ್ಯ ಬರೆಯಲಾರ ಎನ್ನುವಷ್ಟು ಒಂದಕ್ಕೊಂದು ವಿರುದ್ಧವಲ್ಲ ಎಂಬ ಮಾತ
ಸುಶಿಕ್ಷಿತರ ಲಕ್ಷ್ಯಕ್ಕೆ ಕೂಡ ತರಬೇಕಾದ ಪ್ರಸಂಗ ಕರ್ನಾಟಕದಲ್ಲಿ
ಅದೇನೆ ಇರಲಿ, ನನ್ನದೊಂದು ಕವನಸಂಗ್ರಹ ಎಂಬುದು ಯಾರಾ
ಆಶ್ಚರ್ಯವೆನ್ನಿಸಿದರೂ ನನಗೆ ಮಾತ್ರ ಹಾಗೆನ್ನಿಸದು.

ಒಟ್ಟು ಹತ್ತೊಂಬತ್ತು ದಿವಸಗಳ 'ಸ್ಫೂರ್ತಿ' ಪರಿಶ್ರಮ
ಸಂಗ್ರಹದಲ್ಲಿದೆ. ಯಾವುದರಲ್ಲೂ ನನ್ನದೆ ಒಂದು ವೈಶಿಷ್ಟವನ್ನು ತೋರಿಸ
ವವನೆಂದು ಹೆಸರುಗೆಟ್ಟ ನನ್ನ ಕವನಶೈಲಿಯೂ ಹಾಗೆ ವಿಶಿಷ್ಟವೆನ್ನಿಸಿ
ಮಾನವಪ್ರಾಣಿಗೆ ಸಹಜವಾದ ನನ್ನ ಅಹಂಕಾರ ತಣಿಯುವುದು, ಈ
ಇನ್ನೊಬ್ಬರಿಗೆ ಸ್ಫೂರ್ತಿಯನ್ನು ತಂದು ನಿಜವಾದ ಪ್ರತಿಭೆಯನ್ನು ಬೆ
ಸಲು ಕಾರಣವಾದರೆ ಹೆಚ್ಚು ಆನಂದ ನನಗೆ.

ಇದರ ಪ್ರಕಟನೆಗೆ ಪ್ರೋತ್ಸಾಹದಿಂದಲೂ ಪರಿಶ್ರಮದಿಂದಲೂ ನೆರವಾ
ಕವಿಭೂಷಣ ಕೃಷ್ಣಶರ್ಮರಿಗೂ, ನನ್ನಂತಹ ಸ್ಫೂರ್ತಿಯಿಂದಲೆ ಅಚ್ಚುಹಾ
ಸಿದ **ವಿಜಯ**ದ ಒಡೆಯರಿಗೂ ವಂದನೆಗಳು.

ಶ್ರೀರಂಗ

ಮುದ್ರಕರು: ಎನ್. ಎಸ್. ಬೆಂಗೇರಿ,
ವಿಜಯ ಮುದ್ರಾಲಯ, ಧಾರವಾಡ

ಪ್ರಕಾಶಕರು: ಎಚ್. ಎಸ್. ಪಾಟೀಲ,
ರಂಗಮಂಗ ಪ್ರಕಾಶನ, ಧಾರವಾಡ

